ISSN 2321 - 3590






# ಇತಿಹಾಸ ದರ್ಪಣ

(ತ್ರೈಮಾಸಿಕ)

ಕನ್ನಡದ ಹೆಮ್ಮೆಯ ಇತಿಹಾಸ ಸಂಶೋಧನ ನಿಯತಕಾಲಿಕೆ

ಪುಸ್ತಕ 37–38
(ಸಂಯುಕ್ತ ಸಂಚಿಕೆ)
ಏಪ್ರಿಲ್ – ಸೆಪ್ಟೆಂಬರ್ 2018

# Itihasa Darpana

(Kannada Quarterly)

*A Peer Reviewed Journal of Historical Research in Kannada*

Book 37-38
(Combined Issue)
April - September 2018




'ಅಧ್ಯಯನಶೀಲ' ಶ್ರೀನಿವಾಸ ರಿತ್ತಿ

ಸಂಪಾದಕರು
**ಹಂ.ಗು. ರಾಜೇಶ್**
ಮೊ: ೭೮೨೯೪ ೦೪೦೬೩

ಉಪ ಸಂಪಾದಕರು
**ಸುಂಕಂ ಗೋವರ್ಧನ**
**ರಶ್ಮಿ ಎಸ್.**
**ಶಿವಕುಮಾರಿ ಎಂ.ಎಸ್.**

ಪುಸ್ತಕ ವಿನ್ಯಾಸ
**ಶ್ವೇತ ಬಿ.ಎಸ್.**

ನಮ್ಮ ವಿಳಾಸ
**ಸಂಪಾದಕರು, ಇತಿಹಾಸ ದರ್ಪಣ**
#೩೩/ಎ, ಐ.ಟಿ.ಐ. ಕಾಲೇಜು
ಹತ್ತಿರ, ಕೆಂಪೇಗೌಡನಗರ
ವಿಶ್ವನೀಡಂ–ಅಂಚೆ
ಬೆಂಗಳೂರು – ೫೬೦ ೦೯೧.
ಮೊ.: ೭೮೨೯೪೦೪೦೬೩

Editor
**H.G. Rajesh**
Mob: 78294 04063

Sub Editors
**Sunkam Govardhan**
**Rashmi S.**
**Shivakumari M.S.**

ಸ್ವಾನ್ ಪ್ರಿಂಟರ್ಸ್
svanprint@gmail.com
☎ 080-26742233

Our Address
**Editor, ITIHASA DARPANA**
# 33/A, Near ITI College,
Kempegowda Nagar
Vishwaneedam Post
Bengaluru - 560 091
Mob: 78294 04063

***E-mail: itihasadarpana@gmail.com***
***Website: itihasadarpana.wordpress.com***

ಓದುಗರ ಸಲಹೆ–ಸೂಚನೆಗಳನ್ನು 'ಇತಿಹಾಸ ದರ್ಪಣ'ವು ಮುಕ್ತವಾಗಿ ಸ್ವಾಗತಿಸುತ್ತದೆ.

ಲೇಖನಗಳಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಲೇಖಕರ ಅಭಿಪ್ರಾಯಗಳೇ ವಿನಃ ಪತ್ರಿಕೆಯ ಅಭಿಪ್ರಾಯವಲ್ಲ. –ಸಂ.

## ಪರಿವಿಡಿ. . .

## ಚಂದಾದಾರರಾಗ ಬಯಸುವಿರಾ?

'ಇತಿಹಾಸ ದರ್ಪಣ'ದ ಚಂದಾದಾರರಾಗ ಬಯಸುವವರು ನಿಮ್ಮ ಆಯ್ಕೆಯ ಚಂದಾ ಹಣವನ್ನು ಡಿ.ಡಿ./ಚೆಕ್/ಎಂ.ಓ ಮೂಲಕ ಕೆಳಕಂಡ ವಿಳಾಸಕ್ಕೆ ಕಳುಹಿಸಿ ಕೊಡಬಹುದು.

- ಡಿ.ಡಿ. ಕಳುಹಿಸಿಕೊಡುವವರು "EDITOR, ITIHASA DARPANA" ಹೆಸರಿಗೆ ಬೆಂಗಳೂರಿನಲ್ಲಿ ಸಂದಾಯವಾಗುವಂತೆ ಡಿ.ಡಿ.ಯನ್ನು ತೆಗೆಸಿ, ಅದನ್ನು ನಿಮ್ಮ ವಿಳಾಸವುಳ್ಳ ಪತ್ರದೊಂದಿಗೆ ನಮಗೆ ಕಳುಹಿಸಿ ಕೊಡಿ.
- ಚೆಕ್ ಮೂಲಕ ಕಳುಹಿಸಿಕೊಡುವವರು ಚೆಕ್ಕನ್ನು "EDITOR, ITIHASA DARPANA" ಹೆಸರಿಗೆ ಬರೆದು, ಚೆಕ್ಕಿನ ಮೇಲ್ಭಾಗದ ಎಡಮೂಲೆಯಲ್ಲಿ "A/C Pay" ಎಂದು ನಮೂದಿಸಿ, ನಿಮ್ಮ ವಿಳಾಸದ ಪತ್ರದೊಂದಿಗೆ ಕಳುಹಿಸಿ. ಬೆಂಗಳೂರಿನ ಹೊರಗಡೆಯ ಚೆಕ್ಕುಗಳಾಗಿದ್ದಲ್ಲಿ ಬ್ಯಾಂಕಿನ ಸೇವಾಶುಲ್ಕ 40/– ರೂ.ಗಳನ್ನು ಚಂದಾ ಹಣದ ಮೊತ್ತದಲ್ಲಿ ಸೇರಿಸಿ ಕಳುಹಿಸಿ ಕೊಡಿ.
- ಇಲ್ಲವಾದಲ್ಲಿ ಬೆಂಗಳೂರಿನ ಚಾಮರಾಜಪೇಟೆಯ ಅಪೆಕ್ಸ್ ಬ್ಯಾಂಕಿನ ಪ್ರಧಾನ ಶಾಖೆಯಲ್ಲಿರುವ "EDITOR, ITIHASA DARPANA" ಹೆಸರಿನ ಚಾಲ್ತಿಖಾತೆ ಸಂ: 101 882ಕ್ಕೆ ಚಂದಾಹಣವನ್ನು ನಿಮ್ಮ ಹೆಸರಿನಲ್ಲಿ ಜಮಾ ಮಾಡಿ, ಸ್ವೀಕೃತಿಯ ನಕಲನ್ನು ನಿಮ್ಮ ವಿಳಾಸದ ಪತ್ರದೊಂದಿಗೆ ನಮಗೆ ಕಳುಹಿಸಿಕೊಡಿ.

### ಪರಿಷ್ಕೃತ ಚಂದಾ ವಿವರ

| | ವಯಕ್ತಿಕ ಚಂದಾ | ಶಾಲಾ ಕಾಲೇಜು ಮತ್ತು ಸಂಘ ಸಂಸ್ಥೆಗಳ ಚಂದಾ |
|---|---|---|
| ವಾರ್ಷಿಕ | 400/– | 600/– |
| ದ್ವೈವಾರ್ಷಿಕ | 700/– | 1100/– |
| ತ್ರೈವಾರ್ಷಿಕ | 1000/– | 1500/– |

### ಚಂದಾ ಕಳುಹಿಸಿಕೊಡಬೇಕಾದ ವಿಳಾಸ

**ಸಂಪಾದಕರು, 'ಇತಿಹಾಸ ದರ್ಪಣ'**
#33/ಎ, ಐ.ಟಿ.ಐ.ಕಾಲೇಜು ಹತ್ತಿರ
ಕೆಂಪೇಗೌಡನಗರ, ವಿಶ್ವನೀಡಂ–ಅಂಚೆ,
ಬೆಂಗಳೂರು–560 091.
ಮೊ–7829404063.

**Editor, ITIHASA DARPANA**
# 33/A, Near ITI College,
Kempegowda Nagar
Vishwaneedam Post
Bengaluru - 560 091
Mob: 78294 04063

**ITIHASA DARPANA** (Quarterly)
A Peer Reviewed Journal of Historical Research in Kannada
ISSN 2321-3590
Book No.: 37-38.
April – September 2018
**Author:** P.V. Krishna Murthy.
**Title:** Ganga Śripuruṣana Hebbāḷada aprakaṭita ṣāsana

# ಗಂಗ ಶ್ರೀಪುರುಷನ ಹೆಬ್ಬಾಳದ ಅಪ್ರಕಟಿತ ವೀರಗಲ್ಲು ಶಾಸನ

**ಪಿ.ವಿ. ಕೃಷ್ಣಮೂರ್ತಿ**
# 37, ಶ್ರೀಕೃಷ್ಣ ಕೃಪ
3ನೆಯ ಅಡ್ಡರಸ್ತೆ,
1ನೆಯ ಮುನೇಶ್ವರ ಬ್ಲಾಕ್,
ಹರಿನಗರಕ್ರಾಸ್
ಬೆಂಗಳೂರು–560108
ಮೊ: 9036808395
pvk.krishnamurthy@gmail.com

ಬೆಂಗಳೂರು ನಗರ ವ್ಯಾಪ್ತಿಯಲ್ಲಿನ ಬೆಂಗಳೂರು–ಬಳ್ಳಾರಿ ಮುಖ್ಯರಸ್ತೆಯಲ್ಲಿರುವ ಇಂದಿನ ಹೆಬ್ಬಾಳ ಗ್ರಾಮವು ಗಾಂಧಿ ಕೃಷಿ ವಿಜ್ಞಾನ ಕೇಂದ್ರ ಮತ್ತು ಬೆಂಗಳೂರು ಕೃಷಿ ವಿಜ್ಞಾನ ವಿಶ್ವವಿದ್ಯಾಲಯ ಮುಂತಾದವುಗಳ ನೆಲೆಯಾಗಿ ಪ್ರಸಿದ್ಧವಷ್ಟೆ. ಈ ಗ್ರಾಮದ ಊರ ಬಾಗಿಲ ಬಳಿ ಹದಿನೇಳನೆಯ ಶತಮಾನದ ಶಾಸನವೊಂದರ [1] ಜೊತೆಯಲ್ಲಿ ಎರಡು ಯಂತ್ರದ ಕಲ್ಲುಗಳು ಹಾಗೂ ಒಂದು ವೀರಗಲ್ಲು ಶಿಲ್ಪದಿಂದ ಕೂಡಿದ ಶಿಲೆಗಳು ಇದ್ದವು. ಇತ್ತೀಚೆಗೆ ರಸ್ತೆ ಅಭಿವೃದ್ಧಿಯ ಭಾಗವಾಗಿ ಅವನ್ನು ತೆರವುಗೊಳಿಸಲು ನಗರಾಡಳಿತದವರು ಮುಂದೆ ಬಂದ ಸಂದರ್ಭದಲ್ಲಿ ಅವುಗಳನ್ನು ರಕ್ಷಿಸಲು ನಗರದ ರಾಜೀವ್ ನೃಪತುಂಗ ಅವರ ನೇತೃತ್ವದ **ಹೆರಿಟೇಜ್ ರಿವೈವಲ್ ಹಬ್**ನ ಕಾರ್ಯಕರ್ತರು ಮುಂದೆ ನಿಂತು, ಅಲ್ಲಿನ ನಿವಾಸಿಗಳ ನೆರವಿನೊಂದಿಗೆ ಅಲ್ಲಿನ ವೀರಗಲ್ಲು ಶಿಲ್ಪದಿಂದ ಕೂಡಿದ ಶಿಲೆಯ ಅಡಿಭಾಗವನ್ನು ಶೋಧಿಸಿದಾಗ ಅಲ್ಲಿ ಅಕ್ಷರಗಳಿರುವುದನ್ನು ಗಮನಿಸಿದರು. ಅವರು ಆ ಭಾಗವನ್ನು ಶುದ್ಧಿಗೊಳಿಸಿ ಛಾಯಾಚಿತ್ರ ತೆಗೆದು, ಕೂಡಲೇ ವಾಟ್ಸಪ್ ಮೂಲಕ ನನಗೆ ರವಾನಿಸಿದರು. (ಆಗ ರಾತ್ರಿ 8 ಗಂಟೆ) ನಾನು ಅದನ್ನು ಆ ಕೂಡಲೇ ಅವಲೋಕಿಸಿ ಅದು ತಲಕಾಡು ಗಂಗರ

ಶ್ರೀಪುರುಷನದೆಂದು (ಕ್ರಿ.ಶ. ಸು 726–788), ಇದುವರೆಗೂ ಅಪ್ರಕಟಿತವೆಂದು, ಅದರ ಲಿಪಿ ಸ್ವರೂಪದ ಹಿನ್ನೆಲೆಯಲ್ಲಿ ಅದರ ಕಾಲ ಸುಮಾರು ಕ್ರಿಸ್ತಶಕ ಎಂಟನೆಯ ಶತಮಾನವೆಂದು ಅದರಲ್ಲಿ ಪೆರ್ಬ್ಬೊಳಲ ಮೂವತ್ತು ಎಂಬ ಪ್ರಾದೇಶಿಕ ವಿಭಾಗದ ಪ್ರಸ್ತಾಪವಿರುವುದನ್ನು ತಿಳಿಸಿದೆ. ಅಷ್ಟಕ್ಕೆ ಅವರು ನನ್ನನ್ನು ಬಿಡದೆ ಮರುದಿನ ಬೆಳಗ್ಗೆಯೇ ನಾನು ಅದನ್ನು ಪ್ರತ್ಯಕ್ಷವಾಗಿ ಪರಿಶೀಲಿಸಲು ಒತ್ತಾಯಮಾಡಿದರು, ಅವರ ಬಳಗದ ಪ್ರಶಾಂತ್‌ವೇಪುರಿ ಎಂಬುವರು ನನ್ನನ್ನು ಅಲ್ಲಿಗೆ ಕರೆದೊಯ್ದರು. ಆಗ ನಾನು ಸ್ಥಳದಲ್ಲಿಯೇ ಶಾಸನದ ಪಾಠವನ್ನು ಸಿದ್ಧಪಡಿಸಿ, ಅನಂತರ ಅದರ ಪಡಿಯಚ್ಚು ಮಾಡಿಕೊಳ್ಳಲಾಯಿತು. ಅಲ್ಲದೆ ಇತ್ತೀಚಿಗೆ **ಇನ್ಸ್‌ಸ್ಕ್ರಿಪ್ಷನ್ ಸ್ಟೋನ್ಸ್ ಆಫ್ ಬೆಂಗಳೂರು** ವೇದಿಕೆಯ ಪಿ.ಎಲ್. ಉದಯ ಕುಮಾರ್ ಅವರು ಒದಗಿಸಿದ ಆ ಶಾಸನದ ಉತ್ತಮ ಛಾಯಾಚಿತ್ರದ ನೆರವಿನಿಂದ ಅದನ್ನು ಮತ್ತೆ ಸೂಕ್ಷ್ಮವಾಗಿ ಪರಿಶೀಲಿಸಿ, ಭಾಷೆ, ಲಿಪಿ, ಬಂಧ ಇವುಗಳ ನೆರವಿನಿಂದ ಸಿದ್ಧಪಡಿಸಿರುವ ಶಾಸನದ ಪಾಠವನ್ನು ಮತ್ತು ಸಾರಾಂಶವನ್ನು ಕೆಳಗೆ ನೀಡಲಾಗಿದೆ. ಪಾಠವನ್ನು ಸಿದ್ಧಪಡಿಸುವಲ್ಲಿ ನೆರವಾದ ನನ್ನ ಗುರುಗಳಾದ ಕೆ.ಆರ್. ಗಣೇಶ, ಕೆ.ಆರ್. ನರಸಿಂಹನ್ ಹಾಗೂ ಮಿತ್ರ ಎಸ್. ಕಾರ್ತಿಕ್ ಅವರಿಗೆ ಧನ್ಯವಾದಗಳು.

**ಶಾಸನದ ಪಾಠ**

1 ಸ್ವಸ್ತಿ ಶ್ರೀ ಸಿರಿಪುರುಷ ಮಹಾರಾಜಾ ಪೃಥುವೀ ರಾಜ್ಯಂಗೆಯ್ಯೆ
2 ಪೆರ್ಬ್ಬೊಳಲ್ನಾಡು ಮೂವತ್ತುಮಾನ್ಪೆಟ್ನ್ಾಗತ್ತರಸರಾಳೆ ಆರ
3 ಕಮ್ಮೋಱರ ಮೈಂದುನಂ ಕೊಡನ್ದಲೆಯರ ಕಿತ್ತಯನಾ ರಟ್ಟವಾ
4 ಡಿ ಕೂಚಿ ತನ್ನೊಡೆ ಊರಟಿವಿನೊಳೆಱಿದಿನ್ದ್ರಕ ಪುಕಾನ್
5 ಪೆರ್ಗುನ್ದಿಯು ಕಿಱುಗುನ್ದಿ ತಮ್ಮ ಕುಳ್ನಿಱಿದೊದು ಇ ಕಲ್ಲುಂ

**ಸಾರಾಂಶ**

ಸಿರಿಪುರುಷ (ಶ್ರೀ>ಸಿರಿ) ಮಹಾರಾಜನು ಭೂಮಿಯನ್ನು (ರಾಜ್ಯವನ್ನು) ಆಳುತ್ತಿದ್ದಾಗ ಪೆರ್ಬ್ಬೊಳಲನಾಡು–30ನ್ನು ಪೆಟ್–? ನಾಗತ್ತರಸನು ಆಳುತ್ತಿರಲು ಆರ (ಎಂಬ ಮನೆತನದ–?) ಕಮ್ಮೋಱ ಎಂಬ ವ್ಯಕ್ತಿಯ ಮೈದುನ ಕೊಡನ್ದಲೆ (ವಂಶದ) ಕಿತ್ತಯ್ಯನು ರಟ್ಟವಾಡಿಯ ದಂಡು ಬಂದಾಗ ಊರಿನ ನಾಶವನ್ನು ತಡೆಯಲು ಹೋರಾಡಿ ಸತ್ತು ಇನ್ದ್ರಲೋಕವನ್ನು ಸೇರಿದ–? = ಸ್ವರ್ಗಸ್ತನಾದ. ಪ್ರಾಯಃ ವೀರನ ಬಂಧುಗಳಾದ ಪೆರ್ಗ್ಗುನ್ದಿ ಮತ್ತು ಕಿಱುಗುನ್ದಿತಮ್ಮ ಎಂಬುವರು ಕುಳ್ನಿಱಿದ (ಕುಳ್+ನಿಱಿದ = ಕುಳ್ಳಿರಿಸಿದ – ಸ್ಥಾಪಿಸಿದ) ಕಲ್ಲು ಇದಾಗಿದೆ.

ಸುಮಾರು 0.6 ಮೀ. ಅಗಲ ಮತ್ತು 1.2 ಮೀ. ಎತ್ತರದ ಈ ವೀರಗಲ್ಲಿನ ಪಾಠದ ಮೇಲ್ಭಾಗದಲ್ಲಿ ಕೆತ್ತಿರುವ ಶಿಲ್ಪದಲ್ಲಿ ಕುದುರೆಯ ಮೇಲೆ ಕುಳಿತಿರುವ ವೈರಿಯ ಚಿತ್ರವನ್ನು ಬಹುಶಃ ಕೆತ್ತಲಾಗಿದ್ದು, ವೀರನು ಅವನನ್ನು ಎದುರಿಸಿ ಹೋರಾಡುವ ಭಂಗಿಯಲ್ಲಿ ನಿಂತಿರುವುದು ಕಂಡುಬರುತ್ತದೆ. ಇಬ್ಬರ ಕೈಯಲ್ಲೂ ಆಯುಧಗಳಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಇಲ್ಲಿ ಶಿಲ್ಪಗೊಂಡಿರುವ ಕುದುರೆಯ ಅಂಗರಚನೆ ವಿಶಿಷ್ಟವಾಗಿದೆ.

ದಕ್ಷಿಣ ಕರ್ನಾಟಕ ಪ್ರದೇಶದ ಮೇಲೆ ಆಡಳಿತ ನಡೆಸಿದ ಗಂಗರಸರಲ್ಲಿ ಶ್ರೀಪುರುಷ ಮಹಾರಾಜನು ಬಹು ಪ್ರಸಿದ್ಧನಾದ ದೊರೆ. ಈತನನ್ನು 'ರಣಭಾಜನ, ರಾಜಕೇಸರಿ, ಭೀಮಕೋಪ, ಲೋಕಧೂರ್ತ, ಪೆರ್ಮಾನಡಿ, ಕೊಂಗುಣಿಮುತ್ತರಸ' ಎಂದು ಮುಂತಾದ ಬಿರುದುಗಳಿಂದ ಶಾಸನಗಳು ವರ್ಣಿಸಿವೆ. ಅಲ್ಲದೆ ರೂಪದಲ್ಲಿ ಕಾಮನೂ, ಧನುರ್ಯುದ್ಧಮಾಡುವಲ್ಲಿ ರಾಮಚಂದ್ರನೂ, ವಿಕ್ರಮದಲ್ಲಿ ಪರರಶುರಾಮನೂ ಐಶ್ವರ್ಯದಲ್ಲಿ ದೇವೇಂದ್ರನೂ, ಪ್ರತಾಪದಲ್ಲಿ ಸೂರ್ಯನೂ, ಪ್ರಭುತ್ವದಲ್ಲಿ ಕುಭೇರನೂ ಆಗಿದ್ದು ಪ್ರಜಾಪರಿಪಾಲನಕ್ಕಾಗಿಯೇ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿದ್ದನೆಂದೂ ಶಾಸನಕವಿಗಳು ಇವನನ್ನು ವಿಧ ವಿಧವಾಗಿ ವರ್ಣಿಸಿವೆ. ಇವನು ಗಜಶಾಸ್ತ್ರವೆಂಬ ಗ್ರಂಥವನ್ನು ರಚಿಸಿದ್ದನೆಂದೂ ತಿಳಿದು ಬರುತ್ತದೆ. ಶ್ರೀಪುರುಷನ ದೀರ್ಘವಾದ ಆಳ್ವಿಕೆಯಲ್ಲಿ ದಕ್ಷಿಣದಲ್ಲಿ ಪ್ರಬಲರಾಗಿ ಮೆರೆಯುತ್ತಿದ್ದ **ಪಾಂಡ್ಯ, ಪಲ್ಲವ** ಹಾಗೂ ಉತ್ತರದ ಕಡೆಯಿಂದ ದಾಳಿಮಾಡಿದ **ರಾಷ್ಟ್ರಕೂಟರ** ಸೊಕ್ಕನ್ನೂ ಮುರಿದು ಯಾರಿಗೂ ಅಡಿಯಾಳಗದೆ ತನ್ನ ಸ್ವತಂತ್ರತೆಯನ್ನು ಕಾದುಕೊಂಡಿದ್ದ ಅಪ್ರತಿಮ ದೊರೆಯಾಗಿದ್ದನು ಶ್ರೀಪುರುಷ ಮಹಾರಾಜ. ಇವನ ಕಾಲದಿಂದಲೇ ಅಧಿಕ ಸಂಖ್ಯೆಯ ಗಂಗರ ಶಿಲಾಶಾಸನಗಳು ಹಾಗೂ ವೀರಗಲ್ಲುಗಳು ತಲೆ ಎತ್ತಿರುವುದು ಗಮನಾರ್ಹ ಸಂಗತಿ.

ಉತ್ತರದಲ್ಲಿ ಬಾದಾಮಿ ಚಲುಕ್ಯರ ರಾಜ್ಯವನ್ನು ಆಕ್ರಮಿಸಿ ಅವರ ಹಿತ್ತೈಸಿಗಳಾಗಿದ್ದ ದಕ್ಷಿಣದ ಈ ಗಂಗರಸರ ರಾಜ್ಯವಾದ ಗಂಗವಾಡಿಯನ್ನು ಆಕ್ರಮಿಸಬೇಕೆಂದು ದಾಳಿಯಿಟ್ಟಿದ್ದ ರಾಷ್ಟ್ರಕೂಟರೊಡನೆ ಗಂಗರಸರು ಹೊರಾಡಿದ ಸಂದರ್ಭದ ಅನೇಕ ವೀರಗಲ್ಲುಗಳು ತುಮಕೂರು ಜಿಲ್ಲೆಯ ಹಿರೀಗುಂಡಗಲ್ಲು ಮುಂತಾದ ಅನೇಕ ಸ್ಥಳಗಳಲ್ಲಿ ಕಂಡುಬರುತ್ತವೆ.[2] ಅಂತಹ ದಾಳಿಯೊಂದರ ಸಂದರ್ಭದ ವೀರಗಲ್ಲೇ ಪ್ರಸ್ತುತ ಹೆಬ್ಬಾಳದಲ್ಲಿ ಶೋಧವಗಿರುವ ಈ ಅಪ್ರಕಟಿತ ವೀರಗಲ್ಲು ಶಾಸನವಾಗಿದೆ.

ಈ ಶಾಸನದಲ್ಲಿ ಪೆರ್ಬ್ಬೊಳಲನಾಡು–30 ಎಂಬ ಆಡಳಿತ ವಿಭಾಗದ ಉಲ್ಲೇಖ ಬಂದಿದೆ. ಅಂದರೆ ಈ ಶಾಸನ ದೊರೆತ ಸ್ಥಳವಾದ ಹೆಬ್ಬಾಳವನ್ನು ಕೇಂದ್ರವಾಗಿಟ್ಟುಕೊಂಡು ಅದರ ಸುತ್ತಮುತ್ತಲ ಸುಮಾರು ಮೂವತ್ತು ಗ್ರಾಮಗಳ ವ್ಯಾಪ್ತಿಯನ್ನು ಪಡೆದಿದ್ದ ನಾಡು ಇದಾಗಿದ್ದಿತೆಂದು ತೋರುತ್ತದೆ. ಇಲ್ಲಿನ ಪೆರ್ಬ್ಬೊಟಿಲ್ ಎಂಬುದು ಇಂದಿನ ಹೆಬ್ಬಾಳ ಗ್ರಾಮವೇ ಆಗಿದೆ. ಪಿರಿಯ + ಪೊಟಿಲ್= ಪೆರ್ಪ್ಪೊಟಿಲ್ > ಪೆರ್ವ್ವೊಟಿಲ್ > ಪೆರ್ಬ್ಬೊಟಿಲ್ > ಪೆರ್ಬ್ಬೊಳ್ > ಪೆಬ್ಬೊಳ್ > ಪೆಬ್ಬಾಳ > ಹೆಬ್ಬಾಳ ಎಂದು ಈ ಶಬ್ದದ ಬೆಳವಣಿಗೆಯ ಸ್ಥೂಲ ಸ್ವರೂಪವಾಗಿದೆ. ಈ ಸ್ಥಳವು 1300 ವರ್ಷಗಳಷ್ಟು ಪುರಾತನವಾದುದಾಗಿದೆ.

ದಕ್ಷಿಣಕ್ಕೆ ಬೆಂಗಳೂರನ್ನೂ ಒಳಗೊಂಡಂತೆ ಉತ್ತರದ ಎಲಹಂಕ ಪ್ರದೇಶವೂ ಈ ಪೆರ್ಬ್ಬೊಳಲ ನಾಡಿನಲ್ಲಿ ಅಂತರ್ಗತವಾಗಿದ್ದವೆಂದು ತೋರುತ್ತದೆ. 'ಎಲವ ವಿಷಯ' ಎಂಬ ಎಲಹಂಕನಾಡಿನ ಪ್ರಾಚೀನತಮ ಉಲ್ಲೇಖವು ಇತ್ತೀಚೆಗೆ ಶೋಧವಾಗಿರುವ ಹೆಸರಘಟ್ಟದ ರಾಜೇಂದ್ರ ಚೋಳನ ಆಳ್ವಿಕೆಯ ಕ್ರಿ.ಶ. 1019ರ ಕನ್ನಡ ಶಾಸನದಲ್ಲಿ ಬಂದಿದೆ.[3] ಪೆರ್ಬ್ಬೊಳಲನಾಡಿನ ಪೂರ್ವಕ್ಕೆ ದಕ್ಷಿಣ ಸಟ್ಟಿನಾಡು ಮತ್ತು ಮಾಶಂದಿ/ ತೊಜೆವಳಿ ನಾಡು, ಪಶ್ಚಿಮಕ್ಕೆ ಕುಕ್ಕಲನಾಡು, ಉತ್ತರಕ್ಕೆ ಸಟ್ಟಿನಾಡು, ದಕ್ಷಿಣಕ್ಕೆ ಬೆಂಪೂರು–

12 ಹಾಗೂ ಹೊಮ್ಮಳಿಗೆ ನಾಡುಗಳು ಮೇರೆಗಳಾಗಿದ್ದವೆಂದು ಹೇಳಬಹುದಾಗಿದೆ. ಈ ಪೆರ್ಬೊೞಳಲ್ (ಪಿರಿಯ + ಪೊಳಲ್) ಅಂದರೆ ಇಂದಿನ ಹೆಬ್ಬಾಳ ಸ್ಥಳವು ಎಂಟನೆಯ ಶತಮಾನಕ್ಕಾಗಲೇ ದೊಡ್ಡ ಪಟ್ಟಣವಾಗಿದ್ದಿತೆಂದು ತೋರುತ್ತದೆ. ಇದು ಬೆಂಗಳೂರನ್ನು ಸಂಪರ್ಕಿಸುವ ಪ್ರಾಚೀನ ವಾಣಿಜ್ಯ ಮಾರ್ಗದಲ್ಲಿಯೇ ಸಮಾವೇಶಗೊಂಡಿರುವುದು ಗಮನಾರ್ಹ ಅಂಶವಾಗಿದ್ದು ಬೆಂಗಳೂರು ಮುಂದೆ ಒಂದು ಪ್ರಮುಖ ವಾಣಿಜ್ಯ ಕೇಂದ್ರವಾಗಿ ರೂಪುಗೊಳ್ಳುವುದಕ್ಕೂ ಎಷ್ಟೋ ಮೊದಲೇ ಹೆಬ್ಬಾಳ ಕೂಡ ಒಂದು ಪ್ರಮುಖ ವಾಣಿಜ್ಯಕೇಂದ್ರವಾಗಿ ಮೆರೆದಿದ್ದಿತೆಂದು ಅಭಿಪ್ರಾಯಪಡಲು ಅವಕಾಶವಿದೆ.

ಪೆಱ್ನಾಗತ್ತರಸ ಎಂಬುವನು ಪೆರ್ಬೊೞಳಲನಾಡು–30ನ್ನು ಆಳುತ್ತಿದ್ದನು. 'ಪೆಱ್' ಎಂಬುದು 'ದೊಡ್ಡ' ಎಂಬರ್ಥದಲ್ಲಿ ಬಳಕೆ ಯಾಗಿರುವುದಕ್ಕೆ ಆಧಾರಗಳಿವೆ. ಅಂದರೆ ಇವನನ್ನು 'ದೊಡ್ಡನಾಗತ್ತರಸ' ಎಂದು ಗ್ರಹಿಸಬಹುದು. 9–10ನೆಯ ಶತಮಾನದ ಪ್ರಸಿದ್ಧ ಬೇಗೂರು ವೀರಗಲ್ಲು ಶಾಸನದಲ್ಲಿ ಇರ್ವ್ವಲಿ ಯೂರ್ ಒಡೆಯನಾದ ಇರುಗನಿಗೆ 'ನಾಗತ್ತರಪಟ್ಟ'ವನ್ನು ನೀಡಿರುವ ಸಂದರ್ಭವನ್ನು ಗಮನಿಸಿದರೆ 'ನಾಗತ್ತರ' ಎಂಬುದು ಒಂದು ಬಿರುದೇ? ಎಂಬ ಸಂದೇಹ ಉಂಟಾಗದೆ ಇರದು. ಕಿತ್ತಯ್ಯ = ಕಿತ್ತರಸ ಎಂದು ಭಾವಿಸಿದರೆ, ಇದೇ ಗಂಗ ಶ್ರೀಪುರುಷನ ಹಿರೀಗುಂಡಗಲ್ಲು ಶಾಸನವೊಂದರಲ್ಲಿ[4] ರಾಷ್ಟ್ರಕೂಟರ ವಿರುದ್ಧ ನಡೆದ ಕಾಳೆಗದ ಸಂದರ್ಭದಲ್ಲೂ 'ಕಿತ್ತರಸ' ಎಂಬುವವನ ಉಲ್ಲೇಖವಿರುವುದನ್ನು ಗಮನಿಸಬಹುದಾಗಿದೆ. 'ಕೂಚಿ' ಎಂಬುವ ಪದಕ್ಕೆ 'ಕೂಚು' ಎಂರ್ಥವೂ ಇದ್ದು ಇದಕ್ಕೆ 'ಸಿದ್ಧತೆ, ಸಜ್ಜು ಎಂಬರ್ಥದ ಜೊತೆಗೆ ಸಿಬಿರದಿಂದ ಸೈನ್ಯದ ರವಾನೆ, ದಂಡಿನ ಚಲನೆ, ದಂಡಿನೊಡನೆ ಪ್ರಯಾಣಮಾಡು' ಎಂಬರ್ಥಗಳು ನಿಘಂಟುಗಳಲ್ಲಿ ದಾಖಲಿಸಿರುವುದನ್ನು ಗಮನಿಸಬಹುದಾಗಿದೆ. ಹಾಗಾಗಿ 'ಆರ ಕಮ್ಮೊಜಿರ ಮೈದುನನಾದ ಕೊಡನ್ದಲೆಯರ ಕಿತ್ತಯನು ರಟ್ಟವಾಡಿಯ (ರಾಷ್ಟ್ರಕೂಟರ) ದಂಡು ದಾಳಿ ಮಾಡಲು ಬಂದಾಗ ನಡೆದ ಊರಟಿವಿನ ಹೋರಾಟದಲ್ಲಿ ಸ್ವರ್ಗಸ್ಥನಾದನೆಂದು ಅರ್ಥೈಸಬಹುದಾಗಿದೆ.

ಈ ಶಾಸನದ ಬಗೆಗೆ ಹೆಚ್ಚಿನ ಅಧ್ಯಯನ ನಡೆಯಬೇಕಿದೆ. ಶಾಸನದ ಪಾಠ ಅನೇಕ ಕಡೆ ಅಸ್ಪಷ್ಟವಾಗಿದ್ದು, ಕಂಡರಣೆಕಾರನಿಂದಾಗಿರುವ ಅಪಲಿಖಿತಗಳೂ ಸೇರಿ ಅತ್ಯಂತ ಖಚಿತವಾಗಿ ಅರ್ಥವನ್ನು ಹೇಳಲು ಸಾಧ್ಯವಾಗುತ್ತಿಲ್ಲ. ಸಂದರ್ಭಾನುಸಾರವಾಗಿ ಅರ್ಥವನ್ನು ಹೇಳಲು ಇಲ್ಲಿ ಪ್ರಯತ್ನಿಸಲಾಗಿದೆ.

---

**ಟಿಪ್ಪಣಿಗಳು ಮತ್ತು ಆಕರ ಸೂಚಿ**


01. **ಎಪಿಗ್ರಾಫಿಯಾ ಕರ್ಣಾಟಿಕಾ** ಸಂಪುಟ IX, {ರೈಸ್ ಆವೃತ್ತಿ}, ಬೆಂಗಳೂರು–136.
02. **ಎಪಿಗ್ರಾಫಿಯಾ ಕರ್ಣಾಟಿಕಾ** ಸಂಪುಟ XVI, ತುಮಕೂರು 86 ರಿಂದ 104 ಸಂಖ್ಯೆಯಲ್ಲಿನ ಹಲವು ವೀರಗಲ್ಲುಗಳು, ತುಮಕೂರು ಜಿಲ್ಲೆಯ ಸಪ್ಲಿಮೆಂಟರಿ ಸಂಪುಟ.
03. ನೋಡಿ: **ಇತಿಹಾಸ ದರ್ಶನ** ಸಂಪುಟ 33(2018)ಪು. 46.
04. **ಎಪಿಗ್ರಾಫಿಯಾ ಕರ್ಣಾಟಿಕಾ** ಸಂಪುಟ XVI, ತುಮಕೂರು 91, ತುಮಕೂರು ಜಿಲ್ಲೆಯ ಸಪ್ಲಿಮೆಂಟರಿ ಸಂಪುಟ.






ಹೆಬ್ಬಾಳದ ಅಪ್ರಕಟಿತ ವೀರಗಲ್ಲು ಶಾಸನ



ಆಧುನಿಕ ತಂತ್ರಜ್ಞಾನದ ಪಡಿಯಚ್ಚು

ಚಿತ್ರ: ಪಿ.ಎಲ್. ಉದಯ ಕುಮಾರ್

ITIHASA DARPANA (Kannada Quarterly) : A Peer Reviewed Journal of Historical Research in Kannada, Book: 37-38, (Combined Issue) April - September 2018, Pages: 192, Edited by: Rajesh H.G.
# 33/A, Near I.T.I. College, Kempegowda Nagara, Vishwaneedam Post, Bengaluru-560 091. Mob.: 7829404063. Email: itihasadarpana@gmail.com, Website: itihasadarpana.wordpress.com

ಮುಖಪುಟ ಚಿತ್ರ : ನಿಲುವುಗಲ್ಲು ಸಮಾಧಿ, ತೋಡಲಬಂಡೆ, ಸಾಸಲು ಹೋಬಳಿ, ದೊಡ್ಡಬಳ್ಳಾಪುರ ತಾಲ್ಲೂಕು.. ಚಿತ್ರ: ಎಸ್. ವೆಂಕಟೇಶ್
ಹಿಂಬದಿ ಚಿತ್ರ : ಆನೆಯನ್ನು ಬೇಟೆಯಾಡುತ್ತಿರುವ ದೃಶ್ಯ, ಗಲ್ಲ ಗುಡ್ಡ ಚಿತ್ರ: ಮೋಹನ ಆರ್.




ಬೆಲೆ: ₹200/–